ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 02ನೇ ಮಾರ್ಚ್, 2020

ಬಾಲ ಕಾರ್ಮಿಕರ ಸಂಖ್ಯೆ ಹೆಚ್ಚಾಗಿರುವ ಬಗ್ಗೆ

ಡಾ: ಜಯಮಾಲ ರಾಮಚಂದ್ರ (ನಾಮನಿರ್ದೇಶನ ಹೊಂದಿದವರು ) :-

95 (133) ಮಾನ್ಯ ಕಾರ್ಮಿಕ ಹಾಗೂ ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಷ್ಟ್ರದ ಇತರೆ ಪ್ರದೇಶಗಳಿಂದ ರಾಜ್ಯಕ್ಕೆ ಬಹುಮುಖ್ಯವಾಗಿ ಬೆಂಗಳೂರು ನಗರಕ್ಕೆ ಬಂದಿರುವ ಬಾಲ ಕಾರ್ಮಿಕರ ಸಂಖ್ಯೆ ಹೆಚ್ಚಾಗಿರುವುದು ಸರ್ಕಾರದ ಗಮನದಲ್ಲಿದೆಯೇ ;

(ಆ) ಕಳೆದ 03 ವರ್ಷಗಳಿಂದ ಬೆಂಗಳೂರು ನಗರದ ಅಕ್ಕಪಕ್ಕದ ಸ್ಥಳದಲ್ಲಿ ಬಾಲ ಕಾರ್ಮಿಕರನ್ನು ರಕ್ಷಿಸಿದ ಪ್ರಕರಣಗಳೆಷ್ಟು ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಇಂತಹ ಪ್ರಕರಣಗಳಲ್ಲಿ ಬಾಲ ಕಾರ್ಮಿಕರನ್ನು ದುಡಿಸಿಕೊಂಡ ಮಾಲೀಕರ ವಿರುದ್ಧ ಸರ್ಕಾರವು ತೆಗೆದುಕೊಂಡ ಕ್ರಮಗಳೇನು ಹಾಗೂ ಎಷ್ಟು ಜನರಿಗೆ ಶಿಕ್ಷೆಯನ್ನು ವಿಧಿಸಲಾಗಿದೆ ;

(ಈ) ಬೆಂಗಳೂರು ನಗರದಲ್ಲಿ ಬಾಲ ಕಾರ್ಮಿಕರ ನಿರ್ಮೂಲನೆಗಾಗಿ ರಾಷ್ಟ್ರೀಯ ಬಾಲ ಕಾರ್ಮಿಕರ (ಎನ್.ಸಿ.ಎಲ್.ಪಿ) ಸಂಸ್ಥೆಯೊಂದನ್ನು ಹೊರತು ಪಡಿಸಿದರೆ ರಾಜ್ಯ ಸರ್ಕಾರದಿಂದ ಚೈಲ್ಡ್ ಸ್ಟೇಟ್ ಪ್ರಾಜೆಕ್ಟ್ ಯೋಜನೆಯ ಅನುಷ್ಠಾನ ಆಗದಿರುವುದು ಸರ್ಕಾರದ ಗಮನದಲ್ಲಿದೆಯೇ ; ಈ ಯೋಜನೆಯನ್ನು ಶೀಘ್ರಗತಿಯಲ್ಲಿ ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರದ ಕ್ರಮಗಳೇನು ?